ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 325.

ಸದಸ್ಯರ ಹೆಸರು : ಶ್ರೀಮತಿ ವೀಣಾ ಅಚ್ಚಯ್ಯ ಎಸ್. (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 17.07.2019

ಉತ್ತರಿಸುವವರು : ಅರಣ್ಯ, ಜೀವಿಪರಿಸ್ಥಿತಿ ಮತ್ತು ಪರಿಸರ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೊಡಗು ಜಿಲ್ಲೆ, ನಾಪೋಕ್ಲು ನಾಡು, ಯವಳಪಾಡಿಯ ರೀಡೀಮ್ಡ್ ಸಾಗುತೋಟಕ್ಕೆ ಹಾಗೂ ವಾಸದ ಮನೆಗೆ ಹೋಗುವ ರಸ್ತೆಯಲ್ಲಿ ಇತ್ತೀಚೆಗೆ ಗುಂಡಿ ತೋಡಿ, ಅವೈಜ್ಞಾನಿಕ ನಿರ್ಬಂಧ ಹೇರಿರುವುದರಿಂದ ತೋಟದ ಮಾಲೀಕರಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು.<br>ಕೊಡಗು ಜಿಲ್ಲೆ, ನಾಪೋಕ್ಲು ನಾಡು, ಯವಳಪಾಡಿಯ ರಿಡೀಮ್ಡ್ ಸಾಗುತೋಟಕ್ಕೆ ಹಾಗು ವಾಸದ ಮನೆಗೆ ಹೋಗುವ ರಸ್ತೆಯಲ್ಲಿ ಇತ್ತೀಚೆಗೆ ಗುಂಡಿ ತೋಡಿರುವುದಕ್ಕೆ (ಸಿಪಿಟಿ) ಕಾರಣಗಳನ್ನು ಈ ಕೆಳಗಿನಂತೆ ವಿವರಿಸಿದೆ.<br>ಶ್ರೀ ಬಿ.ಯು ಪೂವಣ್ಣ, .ಯವಳಪಾಡಿ ಗ್ರಾಮ ಇವರಿಗೆ ಸೇರಿದ ರಿಡೀಮ್ಡ್ ಸಾಗು ಜಾಗ ಸರ್ವೆ ನಂ.52ಎ, 52ಬಿ ಮತ್ತು 52ಸಿ ರ 41.55 ಎಕರೆ ಜಾಗವಿದ್ದು, ಈ ಜಾಗವು ಪಡಿನಾಲ್ಕು ನಾಡು ಮೀಸಲು ಅರಣ್ಯದೊಳಗಿನ ಎನ್ ಕ್ಲೋಸರ್ ಆಗಿದ್ದು, ಕೂರ್ಗ್ ಗೆಜೆಟ್ ನೋಟಿಫಿಕೇಷನ್ ಸಂಖ್ಯೆ: 1906 ರ ಪ್ರಕಾರ ವಿವರ ಈ ರೀತಿ ಇರುತ್ತದೆ.<br>LV: Jamma malai enclosure area 163.58 acres consisting of survey No.79 Katikundu Moirapole 76 Anepare Kataditundu 77 and 52 Katikundu Coffee Saguvali Malai of Yavakapadi village Right of ingress and egress is by P.R.W.No. 3 of Yavakapadi village.<br>ಸದರಿ ಜಾಗವನ್ನು ಸಂಪರ್ಕಿಸಲು ರಸ್ತೆಯ ವಿವರ ಈ ಕೆಳಕಂಡಂತಿದೆ.<br>P.R.W.No.3 of Katiakundu malai path to a width of three feet branching from P.R.W.No.2 above at enclosure No. LIV and passes South and Westward serving enclosure No. LV and LX and meets P.R.W.No.2 at enclosure No. LIX;<br>ಶ್ರೀ.ಬಿ.ಯು.ಪೂವಣ್ಣ, ಯವಳಪಾಡಿ ಗ್ರಾಮ ಇವರಿಗೆ ಸೇರಿದ ರಿಡೀಮ್ಡ್ ಸಾಗು ಜಾಗ ಸರ್ವೆ ನಂ.52ಎ, 52ಬಿ ಮತ್ತು 52 ಸಿ ರ 41.55 ಎಕರೆ ಜಾಗದಲ್ಲಿ ಮರ ಕಡಿಯಲು ವೃಕ್ಷಾಧಿಕಾರಿಗಳು ಅನುಮತಿ ನೀಡಿದ್ದು, ಸದರಿಯವರು 193 ಮರಗಳನ್ನು ಕಡಿದು ಅವುಗಳಿಂದ ತಯಾರಿಸಿದ ಸ್ವತ್ತುಗಳನ್ನು ಸಾಗಿಸಲು ಅನುಮತಿ ಕೋರಿದ ಹಿನ್ನಲೆಯಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು, ಇವರ ಕಛೇರಿ ಪತ್ರ ಸಂಖ್ಯೆ: ಎ5/(3)/ಜಿ.ಎಫ್.ಎಲ್/ಸಿಆರ್-2/2006-07 ದಿನಾಂಕ: |
| ಆ | ಬಂದಿದ್ದಲ್ಲಿ, ಹಲವಾರು ವರ್ಷಗಳಿಂದ ಇಲ್ಲದ ಈ ರೀತಿಯ ನಿರ್ಬಂಧಗಳನ್ನು ಇತ್ತೀಚೆಗೆ ಹೇರಲು ಕಾರಣಗಳೇನು; | |

| | | |
|---|---|---|
| | | 05.05.2006ರಲ್ಲಿ ಕಡಿದು ಪರಿವರ್ತಿಸಿದ ಸ್ವತ್ತನ್ನು ಸಾಗಿಸಲು 30 ದಿನಗಳವರೆಗೆ (05.06.2006 ರವರೆಗೆ) ಅರಣ್ಯ ರಸ್ತೆಯನ್ನು ಅಗಲೀಕರಿಸದೆ ಹಾಗೂ ಯಾವುದೇ ರಿಪೇರಿ ಕೆಲಸ ನಡೆಸದೆ ಅರಣ್ಯ ಸಿಬ್ಬಂದಿಗಳ ಸಮಕ್ಷಮ ಸಾಗಾಟ ಮಾಡಲು ಅನುಮತಿಯನ್ನು ನೀಡಲಾಗಿತ್ತು. ಸದರಿ ಆದೇಶವು ಒಂದು ಬಾರಿಗೆ ಮಾತ್ರ ಅನ್ವಯವಾಗುವಂತೆ ನೀಡಲಾಗಿತ್ತು. ಕಡಿದ ಮರಗಳ ಸ್ವತ್ತನ್ನು ಸಾಗಿಸಿದ ನಂತರ ಸದರಿ ರಸ್ತೆಯನ್ನು ರದ್ದುಪಡಿಸಿ ಮೂರು ಅಡಿ ಅಗಲದ ಕಾಲುದಾರಿಯನ್ನು ಮಾತ್ರ ಉಪಯೋಗಿಸುವಂತೆ ಆದೇಶಿಸಲಾಗಿತ್ತು. ಸದರಿ ಅನುಮತಿಯು ತಾತ್ಕಾಲಿಕವಾಗಿದ್ದು, ಮತ್ತೆ ಸದರಿ ರಸ್ತೆಯನ್ನು ಯಾವುದೇ ವ್ಯಕ್ತಿ/ಸಂಸ್ಥೆ/ಇಲಾಖೆಯಿಂದ ವಾಹನ ಸಂಚಾರಕ್ಕೆ ಉಪಯೋಗಿಸಲು ಅನುಮತಿ ನೀಡಲಾಗುವುದಿಲ್ಲವೆಂದು ಹಾಗೂ ಸದರಿ ಜಾಗದಲ್ಲಿ ಮತ್ತೆ ಮರಕಡಿತಲೆ ಆದೇಶವನ್ನು ನೀಡದಂತೆ ಷರತ್ತನ್ನು ವಿಧಿಸಲಾಗಿತ್ತು.<br>ಆದರೂ, ಶ್ರೀ.ಬಿ.ಯು ಪೂವಣ್ಣ, ಇವರು ಸದರಿ ಜಾಗದಲ್ಲಿ ಕೂಪು ರಸ್ತೆಯನ್ನು ಇಲಾಖಾ ಅನುಮತಿ ಪಡೆಯದೆ ಹಿಟಾಚಿ ಯಂತ್ರವನ್ನು ಬಳಸಿ ದುರಸ್ಥಿಪಡಿಸಿದ್ದು, ಕರ್ನಾಟಕ ಅರಣ್ಯ ಕಾಯ್ದೆ-1963 ಮತ್ತು ನಿಯಮಗಳ ಉಲ್ಲಂಘನೆಯಾಗಿರುವುದರಿಂದ ಇವರ ವಿರುದ್ಧ ಮಾಕುಟ್ಟ ವಲಯದಲ್ಲಿ ಅರಣ್ಯ ಮೊಕದ್ದಮೆ ಸಂಖ್ಯೆ: 1/2018-19 ನ್ನು ದಿನಾಂಕ: 15.01.2019 ರಲ್ಲಿ ದಾಖಲಿಸಿ ಹಿಟಾಚಿ ಯಂತ್ರವನ್ನು ಇಲಾಖಾ ಪರ ಅಮಾನತ್ತು ಪಡಿಸಲಾಗಿತ್ತು. ನಂತರ ಆರೋಪಿಯಿಂದ ರೂ.50,000/-ಗಳನ್ನು ದಂಡವನ್ನಾಗಿ ಪಾವತಿಸಿಕೊಂಡು ಹಿಟಾಚಿ ಯಂತ್ರವನ್ನು ಬಿಡುಗಡೆಗೊಳಿಸಿ ಪ್ರಕರಣವನ್ನು ಇತ್ಯರ್ಥ ಪಡಿಸಲಾಗಿತ್ತು. ನಂತರ ಆರೋಪಿಯು ಪುನಃ ಅದೇ ರಸ್ತೆಯನ್ನು ಅಕ್ರಮವಾಗಿ ಬಳಸಿ ನಿರಂತರವಾಗಿ ವಾಹನಗಳಲ್ಲಿ ಸಂಚರಿಸುತ್ತಿದ್ದರು. ಇದನ್ನು ತಡೆಗಟ್ಟುವ ಸಲುವಾಗಿ ಸದರಿ ಸ್ಥಳದಲ್ಲಿ ಜಾನುವಾರು ನಿರೋಧಕ ಕಂದಕವನ್ನು *(ಸಿ.ಪಿ.ಟಿ)* ನಿರ್ಮಿಸಿ ಚೈನ್ ಗೇಟ್ ಅನ್ನು ಅಳವಡಿಸಲಾಗಿರುತ್ತದೆ. |
| ಇ. | ಈ ಬಗ್ಗೆ ವಾಸ್ತವಾಂಶಗಳನ್ನು ಪರಿಶೀಲಿಸಿ ಈ ರೀತಿಯ ಅವೈಜ್ಞಾನಿಕ ನಿರ್ಬಂಧಗಳನ್ನು ಕೈಬಿಡಲಾಗುವುದೇ? | ಮೇಲೆ ವಿವರಿಸಿರುವಂತೆ ಶ್ರೀ ಬಿ.ಯು. ಪೂವಣ್ಣ ಇವರು ಯಾವುದೇ ಅನುಮತಿ ಪಡೆಯದೆ ಉಪಯೋಗಿಸುತ್ತಿದ್ದ ರಸ್ತೆಯನ್ನು ಕರ್ನಾಟಕ ಅರಣ್ಯ ಕಾಯ್ದೆಯ ಉಲ್ಲಂಘನೆ ಪ್ರಕರಣದಲ್ಲಿ ಪರಿಶೀಲಿಸಿ ಸದರಿ ರಸ್ತೆಯ ಅಕ್ರಮ ಬಳಕೆಯನ್ನು ತಡೆಗಟ್ಟಲು ಕ್ರಮ ಕೈಗೊಳ್ಳಲಾಗಿದೆ. |

ಸಂಖ್ಯೆ: ಅಪಜೀ 21 ಎಫ್‌ಎಫ್ 2019

ಸತೀಶ ಜಾರಕಿಹೊಳಿ

(ಸತೀಶ್ ಎಲ್. ಜಾರಕಿಹೊಳಿ) ಸಚಿವರು

ಅರಣ್ಯ, ಜೀವಿ ಪರಿಸ್ಥಿತಿ ಮತ್ತು ಪರಿಸರ ಸಚಿವರು